# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 88 (206)

ಸದಸ್ಯರ ಹೆಸರು : ಶ್ರೀ ಕೆ. ಪ್ರತಾಪಚಂದ್ರ ಶೆಟ್ಟಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಉತ್ತರಿಸುವ ದಿನಾಂಕ : 13-09-2021

ಉತ್ತರಿಸುವವರು : ಅರಣ್ಯ, ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವರು.

<table>
<tr><th>ಕ್ರ. ಸಂ</th><th>ಪ್ರಶ್ನೆ</th><th>ಉತ್ತರ</th></tr>
<tr><td>1</td><td>ಕೊಡಚಾದ್ರಿ ಚಾರಣದ ಶುಲ್ಕ ಪರಿಷ್ಕರಣೆಗೆ ಇರುವ ಸಕ್ಷಮ ಪ್ರಾಧಿಕಾರ ಯಾವುದು; ಇತ್ತೀಚಿಗೆ ಕೊಡಚಾದ್ರಿ ಚಾರಣಕ್ಕೆ ಶುಲ್ಕ ಪರಿಷ್ಕರಣೆಯನ್ನು ಮಾಡಿರುವುದು ಇಲಾಖೆಯ ಗಮನಕ್ಕೆ ಬಂದಿದೆಯೇ; ಹೌದಾದಲ್ಲಿ, ಶುಲ್ಕ ಪರಿಷ್ಕರಣೆಯ ಪೂರ್ವದಲ್ಲಿ ಮತ್ತು ಶುಲ್ಕ ಪರಿಷ್ಕರಣೆಯ ನಂತರ ವಿಧಿಸಲಾದ ಶುಲ್ಕದ ಮೊಬಲಗುಗಳು ಯಾವುವು;</td><td>ವನ್ಯಜೀವಿ ಸಂರಕ್ಷಣಾ ಕಾಯ್ದೆ 1972ರ ಸೆಕ್ಷನ್ 28 ರಂತೆ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ ಮತ್ತು ಮುಖ್ಯ ವನ್ಯಜೀವಿ ಪರಿಪಾಲಕರು, ಬೆಂಗಳೂರು ರವರು ಚಾರಣ ಶುಲ್ಕ ನಿಗದಿಗೆ ಸಕ್ಷಮ ಪ್ರಾಧಿಕಾರವಾಗಿರುತ್ತಾರೆ.<br><br>ಈ ಕಛೇರಿಯ ಅಧಿಕೃತ ಜ್ಞಾಪನ ಪತ್ರ ಸಂಖ್ಯೆ: PCCF(WL)/B2/TariffRates/ CR-39(E )/2020-21, ದಿನಾಂಕ: 31/03/2021 ರಲ್ಲಿ ದಿನಾಂಕ: 1-04-2021 ರಿಂದ ಜಾರಿಗೆ ಬರುವಂತೆ ಕೊಡಚಾದ್ರಿ ಪ್ರವೇಶಕ್ಕೆ ಶುಲ್ಕವನ್ನು ಪರಿಷ್ಕರಣೆ ಮಾಡಲಾಗಿರುತ್ತದೆ.<br><br>ಶುಲ್ಕ ಪರಿಷ್ಕರಣೆಯ ಪೂರ್ವ ಮತ್ತು ನಂತರದ ಶುಲ್ಕದ ವಿವರ ಈ ಕೆಳಗಿನಂತಿರುತ್ತದೆ:<br><br><table><tr><th>ಕ್ರ. ಸಂ</th><th>ಚಟುವಟಿಕೆಗಳು</th><th>ಶುಲ್ಕ ಪರಿಷ್ಕರಣೆಯ ಪೂರ್ವ ಶುಲ್ಕ</th><th>ಶುಲ್ಕ ಪರಿಷ್ಕರಣೆಯ ನಂತರ ನಿಗದಿಪಡಿಸಿದ ಶುಲ್ಕ</th></tr><tr><td>1</td><td>ಪ್ರವೇಶ ಶುಲ್ಕ</td><td>ಕ್ರ.ಸಂ 1(III) ಭಾರತೀಯರಿಗೆ - 25.00, ಮಕ್ಕಳಿಗೆ -10.00</td><td>ಕ್ರ.ಸಂ 1(B)(III) ಭಾರತೀಯರಿಗೆ -100.00, ವಿದೇಶಿಯರಿಗೆ –400.00, ಮಕ್ಕಳಿಗೆ -50.00</td></tr><tr><td>2</td><td>ಚಾರಣ ಶುಲ್ಕ</td><td>ಕ್ರ.ಸಂ (3) 200.00</td><td>ಕ್ರ.ಸಂ 3(II) 300.00</td></tr></table></td></tr>
<tr><td>2</td><td>ಕಳೆದ ಮೂರು ವರ್ಷಗಳಲ್ಲಿ ಕೊಡಚಾದ್ರಿಯ ಚಾರಣದಿಂದ ಸಂಗ್ರಹಿಸಲಾದ ವಿವಿಧ ಶುಲ್ಕಗಳ ಮೊತ್ತವೆಷ್ಟು; ಸಂಗ್ರಹಿಸಲಾದ ಶುಲ್ಕವನ್ನು ಯಾವ ಲೆಕ್ಕ ಶೀರ್ಷಿಕೆಗೆ ಜಮ ಮಾಡಲಾಗುತ್ತದೆ. ಕಳೆದ ಮೂರು ವರ್ಷಗಳಲ್ಲಿ ಯಾವ ಯಾವ ಉದ್ದೇಶಗಳಿಗೆ ಈ ಶುಲ್ಕದಿಂದ ಸಂಗ್ರಹಿಸಿದ ಮೊತ್ತವನ್ನು ಬಳಕೆ ಮಾಡಲಾಗಿದೆ ಮತ್ತು ಅವುಗಳ ವೆಚ್ಚವೆಷ್ಟು;</td><td>ಕಳೆದ ಮೂರು ವರ್ಷಗಳಲ್ಲಿ ಕೊಡಚಾದ್ರಿಯಲ್ಲಿ ಸಂಗ್ರಹಿಸಿದ ಮೊತ್ತವನ್ನು ಸರ್ಕಾರದ ಆದೇಶ ಸಂಖ್ಯೆ: ಅಪಜೀ 180 ಎಫ್‌ಡಬ್ಲ್ಯೂಎಲ್ 2014 ದಿನಾಂಕ: 16.11.2016ರನ್ವಯ ಭದ್ರಾ ಹುಲಿ ಸಂರಕ್ಷಿತ ಪ್ರತಿಷ್ಠಾನ ನಿಧಿಗೆ ಜಮೆ ಮಾಡಲಾಗುತ್ತಿದೆ ಹಾಗೂ ಸ್ಥಳೀಯ ಅಭಿವೃದ್ಧಿ ಉದ್ದೇಶಕ್ಕಾಗಿ ಕಟ್ಟಿನಹೊಳೆ ಪರಿಸರ ಅಭಿವೃದ್ಧಿ ಸಮಿತಿಗೆ ಜಮೆ ಮಾಡಲಾಗುತ್ತಿದೆ.</td></tr>
</table>

ಕಳೆದ ಮೂರು ವರ್ಷಗಳಲ್ಲಿ ಕೊಡಚಾದ್ರಿಯ ಚಾರಣದಿಂದ ಸಂಗ್ರಹಿಸಲಾದ ವಿವಿಧ ಶುಲ್ಕಗಳ ವಿವರ ಈ ಕೆಳಕಂಡಂತಿದೆ:

(ರೂ.ಲಕ್ಷಗಳಲ್ಲಿ)

| ಕ್ರ. ಸಂ | ವರ್ಷ | ರಕ್ಷಿತಾರಣ್ಯದ ಅಭಿವೃದ್ಧಿ ಉದ್ದೇಶಕ್ಕಾಗಿ ಭದ್ರಾ ಹುಲಿ ಪ್ರತಿಷ್ಠಾನ ನಿಧಿಗೆ ಜಮ ಮಾಡಿದ ಶುಲ್ಕ | ಸ್ಥಳೀಯ ಅಭಿವೃದ್ಧಿ ಉದ್ದೇಶಕ್ಕಾಗಿ ಕಟ್ಟಿನಹೊಳೆ ಪರಿಸರ ಅಭಿವೃದ್ಧಿ ಸಮಿತಿಗೆ ಜಮೆ ಶುಲ್ಕ | ಕೊಡಚಾದ್ರಿ ಯಲ್ಲಿ ಸಂಗ್ರಹಿಸಿದ ವಿವಿಧ ಶುಲ್ಕಗಳ ಒಟ್ಟು ಮೊತ್ತ |
|---|---|---|---|---|
| 1 | 2 | 3 | 4 | 5 |
| 1 | 2018-19 | 39,90,100.00 | 23,22,743.00 | 63,12,843.00 |
| 2 | 2019-20 | 49,31,295.00 | 28,48,421.00 | 77,79,716.00 |
| 3 | 2020-21 | 17,62,525.00 | 11,15,928.00 | 28,78,453.00 |
| 4 | 2021-22 (ಆಗಸ್ಟ ಅಂತ್ಯದವರೆಗೆ) | 19,64,248.00 | 2,82,021.00 | 22,46,269.00 |

ಕುದುರೆಮುಖ ವನ್ಯಜೀವಿ ವಿಭಾಗದ ಮೂರು ರಕ್ಷಿತಾರಣ್ಯಗಳಲ್ಲಿ ವಿವಿಧ ಶುಲ್ಕಗಳ ಮೂಲಕ ಸಂಗ್ರಹವಾಗುವ ಆದಾಯವನ್ನು ರಕ್ಷಿತಾರಣ್ಯದ ಅಭಿವೃದ್ಧಿ ಉದ್ದೇಶಕ್ಕಾಗಿ ಭದ್ರಾ ಹುಲಿ ಪ್ರತಿಷ್ಠಾನ ನಿಧಿಗೆ ಜಮ ಮಾಡಲಾಗುತ್ತಿದ್ದು, ಈ ಆದಾಯದಡಿ 2018-19ರಲ್ಲಿ ಯಾವುದೇ ವೆಚ್ಚ ಮಾಡಿರುವುದಿಲ್ಲ. ಕಳೆದ ಎರಡು ವರ್ಷಗಳಲ್ಲಿ ಸದರಿ ವಿಭಾಗದ ವಿವಿಧ ವಲಯಗಳಲ್ಲಿ ಗಸ್ತುಪಥ ನಿರ್ವಹಣೆ, ಚಾರಣಪಥ ನಿರ್ವಹಣೆ, ಕೆರೆ ನಿರ್ವಹಣೆ, ಸೂಚನಾ ಫಲಕಗಳ ಅಳವಡಿಕೆ ಮತ್ತು ನಿರ್ವಹಣೆ, ಆರ್ಕಿಡೇರಿಯಂ ಅಭಿವೃದ್ಧಿ, ವಾಹನ ನಿರ್ವಹಣೆ, ಕಚೇರಿ ವೆಚ್ಚ, ಕಟ್ಟಿನಹೊಳೆ ಶೌಚಾಲಯ ನಿರ್ಮಾಣ, ಅರಣ್ಯದಂಚಿನ ಗ್ರಾಮಸ್ಥರಿಗೆ ವೈದ್ಯಕೀಯ ಶಿಬಿರ, ದಿನಗೂಲಿ ನೌಕರರ ವೇತನ ಪಾವತಿ, ಮಂಚೂಣಿ ಸಿಬ್ಬಂದಿಗಳಿಗೆ ವಿಮೆ, ವನ್ಯಜೀವಿ ಸಪ್ತಾಹ ಆಚರಣೆ, ಪೀಠೋಪಕರಣ ಖರೀದಿಗಳಿಗೆ ವೆಚ್ಚ ಭರಿಸಲಾಗಿದೆ. 2019-20ರಲ್ಲಿ ರೂ. 48.93395 ಲಕ್ಷ ಮತ್ತು 2020-21ರಲ್ಲಿ ರೂ. 67.15329 ಲಕ್ಷ ವೆಚ್ಚ ಭರಿಸಲಾಗಿದೆ. ಮತ್ತು 2021-22ರಲ್ಲಿ ಈವರೆಗೆ ಯಾವುದೇ ವೆಚ್ಚ ಮಾಡಿರುವುದಿಲ್ಲ.

ಸ್ಥಳೀಯ ಅಭಿವೃದ್ಧಿ ಉದ್ದೇಶಕ್ಕಾಗಿ ಕಟ್ಟಿನಹೊಳೆ ಪರಿಸರ ಅಭಿವೃದ್ಧಿ ಸಮಿತಿಗೆ ಜಮ ಮಾಡಿದ ಆದಾಯದಲ್ಲಿ ಕಳೆದ ಮೂರು ವರ್ಷಗಳಲ್ಲಿ ಗ್ರಾಮಸ್ಥರಿಗೆ ಸೋಲಾರ್‌ದೀಪ ವಿತರಣೆ, ಗ್ರಾಮಸ್ಥರಿಗೆ ಸೋಲಾರ್ ವಾಟರ್ ಹೀಟರ್, ಸೋಲಾರ್ ಬೀದಿ ದೀಪ, ಕೊಡಚಾದ್ರಿ ಮಣ್ಣು ರಸ್ತೆ ನಿರ್ವಹಣೆ, ಸ್ಥಳೀಯ ಜನರಿಗೆ ಉದ್ಯೋಗ, ಕಛೇರಿ ವೆಚ್ಚ, ಗ್ರಾಮದ ಶಾಲಾ ವಿದ್ಯಾರ್ಥಿಗಳಿಗೆ ಉಚಿತ ವಾಹನ, ಸಮವಸ್ತ್ರ, ಪುಸ್ತಕ, ಬ್ಯಾಗ್ ವಿತರಣೆ, ಸ್ಥಳೀಯ ದೇವಸ್ಥಾನಕ್ಕೆ ಧನ ಸಹಾಯ, ಸ್ಥಳೀಯ ಸಂಘ ಸಂಸ್ಥೆಗಳಿಗೆ ಧನ ಸಹಾಯ, ಸಮಿತಿ ವ್ಯಾಪ್ತಿಯ ಸ್ಥಳೀಯರಿಗೆ ವೈದ್ಯಕೀಯ ವೆಚ್ಚ, ಕಳ್ಳಬೇಟೆ ತಡೆ ಶಿಬಿರದ ನಿರ್ವಹಣೆ, ವಾಹನ ವೆಚ್ಚ, ಸಿಬ್ಬಂದಿಗಳ ಸೌಲಭ್ಯಗಳು, ಶಾಲೆಗಳಿಗೆ ಸ್ಮಾರ್ಟ್ ಕ್ಲಾಸ್ ವ್ಯವಸ್ಥೆ, ವನ್ಯಜೀವಿ ಸಪ್ತಾಹ ಆಚರಣೆ, ಅಣಬೆ ಕೃಷಿ ತರಬೇತಿ, ಅಡಿಕೆ ಸುಲಿಯುವ ಯಂತ್ರ, ಅಡಿಕೆ ಮರ ಹತ್ತುವ ಯಂತ್ರ,

| | | |
|---|---|---|
| | | ಮುಂತಾದ ಸ್ಥಳೀಯ ಜನರಿಗೆ ಪ್ರಯೋಜನವಾಗುವಂತಹ ಕಾಮಗಾರಿಗಳಿಗೆ ವೆಚ್ಚ ಭರಿಸಲಾಗಿದೆ. 2018-19ನೇ ಸಾಲಿನಲ್ಲಿ ರೂ.23.00472ಲಕ್ಷ, 2019-20ರಲ್ಲಿ ರೂ.17.37820 ಲಕ್ಷ, 2020-21ರಲ್ಲಿರೂ.17.25008ಲಕ್ಷ, ವೆಚ್ಚ ಭರಿಸಲಾಗಿದೆ. |
| 3 | ಕೊಡಚಾದ್ರಿಯಲ್ಲಿ ಪೂರ್ಣ ಪ್ರಮಾಣದ ಮೂಲ ಸೌಕರ್ಯಗಳಿಲ್ಲದಿದ್ದರೂ ಜೀಪ್ ಸಂಚರಿಸಲು ರಸ್ತೆ ಕೂಡಾ ಸರಿಯಾಗಿಲ್ಲದಿದ್ದರೂ ಶುಲ್ಕ ವಿಧಿಸುತ್ತಿರುವುದರ ಕುರಿತು ಸಾರ್ವಜನಿಕರು ಅಸಮಾಧಾನ ವ್ಯಕ್ತಪಡಿಸಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಕೊಡಚಾದ್ರಿಯನ್ನು ಪ್ರವಾಸಿ ಸ್ನೇಹಿಯಾಗಿಸಿರುವುದರ ಕುರಿತು ಸರ್ಕಾರದ ಯೋಜನೆಗಳು ಯಾವುವು? | ಕೊಡಚಾದ್ರಿಯು ಅಭಯಾರಣ್ಯ ವ್ಯಾಪ್ತಿಯಲ್ಲಿದ್ದು, ವನ್ಯಜೀವಿ ಸಂರಕ್ಷಣಾ ಕಾಯ್ದೆ, 1972ರ ಸೆಕ್ಷನ್ 28ರಂತೆ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ವನ್ಯಜೀವಿ) ಕಛೇರಿಯ ಅಧಿಕೃತ ಜ್ಞಾಪನ ಪತ್ರ ಸಂಖ್ಯೆ: PCCF(WL)/B2/Tariff Rates/ CR-39(E)/2020-21, ದಿನಾಂಕ: 31/03/2021 ರಲ್ಲಿ ನಿಗದಿಪಡಿಸಿದ ಶುಲ್ಕವನ್ನು ಪಾವತಿಸಿ ಅಭಯಾರಣ್ಯಕ್ಕೆ ಪ್ರವೇಶಿಸಬೇಕಾಗಿರುತ್ತದೆ.<br>ಕೊಡಚಾದ್ರಿಯನ್ನು ಪ್ರವಾಸಿ ಸ್ನೇಹಿಯಾಗಿಸಿರುವುದರ ಕುರಿತು ಈಗಾಗಲೆ ಕೊಡಚಾದ್ರಿಯ ಕಟ್ಟಿನಹೊಳೆ ಪ್ರವೇಶದಲ್ಲಿ ಮೂಲಭೂತ ಸೌಕರ್ಯ ಕುರಿತು ಪ್ರವಾಸಿಗರಿಗೆ ಕುಡಿಯುವ ನೀರಿನ ವ್ಯವಸ್ಥೆ, ಪುರುಷ ಮತ್ತು ಮಹಿಳೆಯರಿಗೆ ಪ್ರತ್ಯೇಕ ಶೌಚಾಲಯಗಳನ್ನು ನಿರ್ಮಾಣ ಮಾಡಲಾಗಿದೆ. ರಸ್ತೆಯು ಅರಣ್ಯ ಪ್ರದೇಶದಲ್ಲಿ ಹಾದುಹೋಗಿದ್ದು, ಇದನ್ನು ಶಾಶ್ವತ ರೀತಿಯಲ್ಲಿ ಅಭಿವೃದ್ಧಿಪಡಿಸಲು ಅರಣ್ಯ ಸಂರಕ್ಷಣಾ ಕಾಯ್ದೆ ಮತ್ತು ವನ್ಯಜೀವಿ ಮಂಡಳಿಯ ಪೂರ್ವಾನುಮತಿ ಅಗತ್ಯವಿರುತ್ತದೆ. ಈ ಬಗ್ಗೆ ಉಪಯೋಗಿ ಸಂಸ್ಥೆಯಾದ ಕೆ.ಆರ್.ಐ.ಡಿ.ಎಲ್, ಶಿವಮೊಗ್ಗ ಇವರು ರಾಷ್ಟ್ರೀಯ ವನ್ಯಜೀವಿ ಮಂಡಳಿಯ ಪೂರ್ವಾನುಮತಿ ಪಡೆಯುವ ಸಲುವಾಗಿ "Parivesh.nic.in" ತಂತ್ರಾಂಶದಲ್ಲಿ ಪ್ರಸ್ತಾವನೆ ಸಲ್ಲಿಸಿದ್ದು, ಸದರಿ ಪ್ರಸ್ತಾವನೆಗೆ ದಿನಾಂಕ: 19.01.2021 ರಂದು ನಡೆದ 15ನೇ ರಾಜ್ಯ ವನ್ಯಜೀವಿ ಮಂಡಳಿಯ ಸಭೆಯಲ್ಲಿ ಅನುಮೋದನೆ ನೀಡಲಾಗಿದ್ದು, ಅದರನ್ವಯ ಪ್ರಸ್ತಾವನೆಯನ್ನು ಸರ್ಕಾರದ ಪತ್ರ ಸಂಖ್ಯೆ: ಎಫ್‌ಇಇ-38-ಎಫ್‌ಎಲ್‌ಎಲ್-2021(ಇ), ದಿನಾಂಕ: 6/7/2021ರಲ್ಲಿ ಕೇಂದ್ರ ಸರ್ಕಾರಕ್ಕೆ ಸಲ್ಲಿಸಲಾಗಿರುತ್ತದೆ. ಅಲ್ಲದೇ ಸದರಿ ಪ್ರಸ್ತಾವನೆ ಕುರಿತಂತೆ ಕೇಂದ್ರ ಸರ್ಕಾರವು ಕೋರಿರುವ ಮಾಹಿತಿಯನ್ನು ಸರ್ಕಾರದ ಪತ್ರ ದಿನಾಂಕ: 1/9/2021ರಲ್ಲಿ ಸಲ್ಲಿಸಲಾಗಿರುತ್ತದೆ. ಪ್ರಸ್ತುತ ಪ್ರಸ್ತಾವನೆಯು ಕೇಂದ್ರ ಸರ್ಕಾರದ ಪರಿಶೀಲನಾ ಹಂತದಲ್ಲಿರುತ್ತದೆ. ಪರಿಸರ ಅಭಿವೃದ್ಧಿ ಸಮಿತಿಯ ಮೂಲಕ ಪ್ರತಿನಿತ್ಯ ಕೊಡಚಾದ್ರಿ ಪ್ರದೇಶದಲ್ಲಿ ಸಂಗ್ರಹವಾಗುವ ಪ್ಲಾಸ್ಟಿಕ್ ತ್ಯಾಜ್ಯಗಳನ್ನು ಸಂಗ್ರಹಿಸಿ ವಿಲೇವಾರಿ ಮಾಡಲಾಗುತ್ತಿದ್ದು ಸದರಿ ಪ್ರದೇಶವನ್ನು ಸ್ವಚ್ಛವಾಗಿ ಇಟ್ಟುಕೊಳ್ಳಲು ಕ್ರಮವಹಿಸಲಾಗಿದೆ. |

**ಸಂಖ್ಯೆ: ಅಪಜೀ 161 ಎಫ್‌ಬ್ಲ್ಯೂಎಲ್ 2021**

**(ಉಮೇಶ್ ವಿ. ಕತ್ತಿ)**
**ಅರಣ್ಯ, ಆಹಾರ, ನಾಗರಿಕ ಸರಬರಾಜು ಮತ್ತು**
**ಗ್ರಾಹಕರ ವ್ಯವಹಾರಗಳ ಸಚಿವರು**